ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 16ನೇ ಮಾರ್ಚ್, 2020

ಸರ್ಕಾರಿ ಸೀಟು ಪಡೆದ ವೈದ್ಯರು ಪಾವತಿಸಬೇಕಾದ ದಂಡದ ಕುರಿತು

ಶ್ರೀ ಎನ್. ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು) :-

1024 (1068) ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಡ್ಡಾಯ ಸರ್ಕಾರಿ ಸೇವೆಯಿಂದ ಬಿಡುಗಡೆ ಹೊಂದಲು ಸರ್ಕಾರಿ ಸೀಟು ಪಡೆದ ವೈದ್ಯರು ಪಾವತಿಸಬೇಕಾದ ದಂಡದ ಮೊತ್ತವೆಷ್ಟು; ಈ ಕುರಿತು ನಿಯಮಗಳೇನು ; ದಂಡ ಪಾವತಿಯಲ್ಲಿ ವಿನಾಯಿತಿ ನೀಡಲು ಇರುವ ನಿಯಮಗಳೇನು ; ಪ್ರತಿಯನ್ನು ಒದಗಿಸುವುದು;

(ಆ) ಕಳೆದ 3 ವರ್ಷಗಳಲ್ಲಿ ಈ ರೀತಿಗಾಗಿ ಪಾವತಿಸಿ ಕಡ್ಡಾಯ ಸರ್ಕಾರಿ ಸೇವೆಯಿಂದ ವಿನಾಯಿತಿ ಪಡೆದ ವೈದ್ಯರ ಸಂಖ್ಯೆ ಎಷ್ಟು ; (ಹೆಸರು, ವಿಳಾಸದೊಂದಿಗೆ ಅವರು ಪಾವತಿಸಿದ ದಂಡದ ಕುರಿತು ಮಾಹಿತಿಯನ್ನು ನೀಡುವುದು)

(ಇ) ದಂಡವನ್ನು ಪಾವತಿಸದೆ ಕಡ್ಡಾಯ ಸರ್ಕಾರಿ ಸೇವೆಯಿಂದ ವಿನಾಯಿತಿಯನ್ನು ಪಡೆಯಲು ಇರುವ ಅವಕಾಶಗಳೇನು ; ಈ ಅವಕಾಶಗಳನ್ನು ಬಳಸಿ ಎಷ್ಟು ವೈದ್ಯರು ಕಡ್ಡಾಯ ಸರ್ಕಾರಿ ಸೇವೆಯಿಂದ ಬಿಡುಗಡೆ ಹೊಂದಿರುತ್ತಾರೆ ; ದಂಡ ಪಾವತಿ ಕಡ್ಡಾಯ ಸರ್ಕಾರಿ ಸೇವೆಯಿಂದ ಬಿಡುಗಡೆ ಹೊಂದಲು ಇರುವ ಅವಕಾಶವನ್ನು ರದ್ದುಗೊಳಿಸಲು ಸರ್ಕಾರ ಚಿಂತನೆ ನಡೆಸಿದೆಯೇ; ಇಲ್ಲವಾದಲ್ಲಿ, ಈ ಕುರಿತು ಯಾವಾಗ ಕ್ರಮ ಕೈಗೊಳ್ಳಲಾಗುವುದು;

(ಈ) ದಂಡವನ್ನು ಪಾವತಿಸದೆ ಕಡ್ಡಾಯ ಸರ್ಕಾರಿ ಸೇವೆಯನ್ನು ಮಾಡದಿರುವ ವೈದ್ಯರ ಪ್ರಾಕ್ಟೀಸ್ ಲೈಸನ್ಸ್ ರದ್ದು ಮಾಡಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ ; ದಂಡವನ್ನು ಪಾವತಿಸದ ಎಷ್ಟು ವೈದ್ಯರ ಪ್ರಾಕ್ಟೀಸ್ ಲೈಸನ್ಸ್ ರದ್ದುಗೊಳಿಸಲಾಗಿದೆ ; (ಹೆಸರಿನೊಂದಿಗೆ ಮಾಹಿತಿ ನೀಡುವುದು)

(ಉ) ಸರ್ಕಾರಿ ಸೀಟು ಪಡೆದ ವಿದ್ಯಾರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಭಾಗದಲ್ಲಿ ಸೇವೆ ಸಲ್ಲಿಸಲೇಬೇಕು ಎಂಬ ನಿಯಮ ರೂಪಿಸುವ ಬಗ್ಗೆ ಸರ್ಕಾರದ ನಿಲುವೇನು ?